CPMG / KA / BG-GPO/13 / 2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೨೮, ೨೦೦೫ (ಶ್ರಾವಣ ೬, ಶಕ ವರ್ಷ ೧೯೨೭) | ಸಂಚಿಕೆ ೩೦ |
|---|---|---|

## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕಾನೂನು ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲಾ 23 ಎಲ್‌ಎಜಿ 2004, ಬೆಂಗಳೂರು, ದಿನಾಂಕ: 5ನೇ ಜುಲೈ 2005**

ಶ್ರೀ ಸಿ.ಎಲ್. ವೆಂಕಟಗಿರಿ, ವಕೀಲರು, ಇವರನ್ನು ಕರ್ನಾಟಕ ಲಾ ಆಫೀಸರ್ಸ್ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳ 1977 ರಲ್ಲಿನ ಷರತ್ತುಗಳಿಗೊಳಪಟ್ಟು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಾಗರದ ಅಪರ ಸರ್ಕಾರಿ ವಕೀಲರನ್ನಾಗಿ ಸರ್ಕಾರ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

(ಪ್ರಭಾರ) ಕಾನೂನು ಇಲಾಖೆ (ಆಡಳಿತ-1)

ಪಿ.ಆರ್. 217

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆನಾಸ 63 ಸಲಫ 2005, ಬೆಂಗಳೂರು, ದಿನಾಂಕ: 11ನೇ ಜುಲೈ 2005**

ಗ್ರಾಹಕರ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/86) ಪ್ರಕರಣ 10 ಮತ್ತು ಕರ್ನಾಟಕ ಗ್ರಾಹಕರ ರಕ್ಷಣಾ ನಿಯಮ, 1988ರ ನಿಯಮ 3 ರನ್ವಯ ಈ ಕೆಳಕಂಡವರನ್ನು ಅವರ ಹೆಸರಿನ ಮುಂದೆ ನಮೂದಿಸಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ:

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ವರ್ಗಾವಣೆ ಮಾಡಿದ ಹುದ್ದೆ ಮತ್ತು ಜಿಲ್ಲಾ ಗ್ರಾಹಕರ ವೇದಿಕೆ |
|---|---|---|
| 1 | 2 | 3 |
| 1 | ಶ್ರೀ ಹೆಚ್.ಎಂ. ಭಜಂತ್ರಿ,<br>ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಸಂಖ್ಯೆ: 251, 7ನೇ ಮುಖ್ಯ ರಸ್ತೆ, ಹಂಪಿನಗರ, ಆರ್‌ಪಿಸಿ ಲೇಔಟ್, ವಿಜಯನಗರ, ಬೆಂಗಳೂರು-560040. | ಅಧ್ಯಕ್ಷರು, ಬೆಂಗಳೂರು ಗ್ರಾಮಾಂತರ ಹಾಗೂ ಬೆಂಗಳೂರು ನಗರ 1ನೇ ಅಪರ ಜಿಲ್ಲಾ ವೇದಿಕೆ, ಸ್ವಾತಿ ಕಾಂಪ್ಲೆಕ್ಸ್, ಶೇಷಾದ್ರಿಪುರಂ, ಬೆಂಗಳೂರು-20. |

| 1 | 2 | 3 |
|---|---|---|
| 2 | ಶ್ರೀ ಸಿದ್ದೇಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಎರವಲು ಸೇವೆ ಮೇರೆಗೆ ಅಪರ ರಿಜಿಸ್ಟ್ರಾರ್ ಕರ್ನಾಟಕ ಲೋಕಾಯುಕ್ತ, ಎಆರ್‌ಇ-4, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು. | ಅಧ್ಯಕ್ಷರು, ಮಂಡ್ಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ. |
| 3 | ಶ್ರೀ ರಾಚಪ್ಪ ಎ. ಚಿನಿವಾಳ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜೆ1ಡಿ-402, ಜ್ಯುಡಿಷಿಯಲ್ ಬ್ಲಾಕ್, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ, ಬೆಂಗಳೂರು-47. | ಅಧ್ಯಕ್ಷರು, ಕೊಪ್ಪಳ ಜಿಲ್ಲಾ ಗ್ರಾಹಕರ ವೇದಿಕೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ವೆಂಕಟಾಚಲಪತಿ**

ಪಿ.ಆರ್. 218

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ENERGY SECRETARIAT

## NOTIFICATION

**No. DE 15 PSR 2002/323, Bangalore, Dated: 8/11th July 2005**

In exercise of powers conferred under Rule 4 (13) (2) (b) of the Karnataka Electricity Reforms (Transfer of Undertakings of KPTCL and its personnel to Electricity Distribution and Retail Supply Companies) Rules, 2002 read with G.O. No. DE 15 PSR 2002, dated: 19th December 2002, the Government of Karnataka hereby nominates Sri Darpan Jain, as a Trustee in the KPTCL and Escoms Pension and Gratuity Trusts, representing Finance Department of Government of Karnataka, with immediate effect and until further orders.

By Order and in the name of the Governor of Karnataka,

PR-219

**SURESH B. KRISHNAPPAVAR**

Under Secretary to Government, Energy Department.

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಇಡಿ 108 ಡಿಸಿಇ 2005, ಬೆಂಗಳೂರು, ದಿನಾಂಕ: 12ನೇ ಜುಲೈ 2005**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 48 ಎಸ್‌ಆರ್‌ಇ 96, ದಿನಾಂಕ: 22.1.97 ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆಗೆ ನಿಯಮಗಳನ್ನು ಹೊರಡಿಸಲಾಗಿದೆ. ಸದರಿ ನಿಯಮಗಳಿಗೆ ಆಗಿಂದಾಗ್ಗೆ ತಿದ್ದುಪಡಿ ಹೊರಡಿಸಲ್ಪಟ್ಟಿದೆ. ಭಾರತದ ಸರ್ವೋಚ್ಚ ನ್ಯಾಯಾಲಯವು ಎಸ್.ಎಲ್.ಪಿ. (ಸಿವಿಲ್) ಸಂಖ್ಯೆ: 15991/99ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ಸಂಖ್ಯೆ: 27.2001ರ ಮೇಲೆ ದಿನಾಂಕ: 04.01.2001 ರಂದು ನೀಡಿದ ತೀರ್ಪಿನನ್ವಯ ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 55 ಎಸ್‌ಆರ್‌ಇ 2001, ದಿನಾಂಕ: 09.07.2002 ರಲ್ಲಿ ಮೇಲ್ಕಂಡಿಸಿದ ಸೇವಾ ವಿಲೀನತೆ ನಿಯಮಗಳಿಗೆ ತಿದ್ದುಪಡಿ ನಿಯಮಗಳನ್ನು ಹೊರಡಿಸಲಾಗಿದ್ದು, ಇದರನ್ವಯ ಎನ್.ಇ.ಟಿ. : ಎಸ್.ಎಲ್.ಇ.ಟಿ. ಪರೀಕ್ಷೆಯನ್ನು ಪಾಸು ಮಾಡದವರು ಸದರಿ ತಿದ್ದುಪಡಿ ನಿಯಮಗಳು ಹೊರಡಿಸಲ್ಪಟ್ಟ ದಿನಾಂಕದಿಂದ 3 ವರ್ಷಗಳೊಳಗೆ ಅಂದರೆ ದಿನಾಂಕ: 09.07.2005 ರೊಳಗೆ ಎನ್.ಇ.ಟಿ. : ಎಸ್.ಎಲ್.ಇ.ಟಿ. ಪಾಸು ಮಾಡಬೇಕಾಗಿತ್ತು. ಸರ್ಕಾರಿ ಅಧಿಸೂಚನೆ ಸಂಖ್ಯೆ: (1) ಇಡಿ 89 ಡಿಸಿಇ 97, ದಿನಾಂಕ: 26.5.2003, (2) ಇಡಿ 89 ಡಿಸಿಇ 97, ದಿನಾಂಕ: 23.6.2003, (3) ಇಡಿ 142 ಡಿಸಿಇ 2003, ದಿನಾಂಕ: 20.9.2003, (4) ಇಡಿ 180 ಡಿಸಿಇ 2003, ದಿನಾಂಕ: 18.10.2003, (5) ಇಡಿ 27 ಡಿಸಿಇ 2004, ದಿನಾಂಕ: 26.2.2004 ಮತ್ತು (6) ಇಡಿ 142 ಡಿಸಿಇ 2004, ದಿನಾಂಕ: 25.9.2004 ಗಳಲ್ಲಿ ಹಲವಾರು ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪದವಿ ಕಾಲೇಜುಗಳಲ್ಲಿನ ಉಪನ್ಯಾಸಕರ ಹುದ್ದೆಯಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ರಲ್ಲಿ ವಿಲೀನಗೊಳಿಸಲಾಗಿತ್ತು. ಹೀಗೆ ರಾಜ್ಯ ವೇತನ ಶ್ರೇಣಿಯಲ್ಲಿ ಸೇವಾ ವಿಲೀನಗೊಳಿಸುವಾಗ ಇವರುಗಳು ಎನ್.ಇ.ಟಿ. / ಎಸ್.ಎಲ್.ಇ.ಟಿ. ಯನ್ನು ದಿನಾಂಕ: 09.07.2005 ರೊಳಗೆ ಪಾಸು ಮಾಡಬೇಕೆಂತಲೂ, ಇಲ್ಲದಿದ್ದಲ್ಲಿ ಇವರನ್ನು ಸೇವೆಯಿಂದ ತೆಗೆದುಹಾಕಲಾಗುವುದೆಂದು ಷರತ್ತನ್ನು ವಿಧಿಸಿ ಸೇವಾ ವಿಲೀನತೆಗೊಳಿಸಲಾಗಿದೆ. ಇದರಂತೆ ಸೇವಾ ವಿಲೀನತೆಗೊಂಡ ಎಲ್ಲಾ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಪೂರ್ವದಲ್ಲಿ ಈ ಷರತ್ತಿಗೆ ಒಪ್ಪಿ ಮುಚ್ಚಳಿಕೆ ಪತ್ರ ಬರೆದುಕೊಟ್ಟಿರುತ್ತಾರೆ. ನೇಮಕಾತಿ ಆದೇಶದಲ್ಲಿ ನಿಗದಿಪಡಿಸಿದ್ದ ಅವಧಿ ದಿನಾಂಕ: 09.07.2005ಕ್ಕೆ ಮುಗಿದಿರುತ್ತದೆ. ಸೇವಾ ವಿಲೀನತೆಗೊಂಡ ಅರೆಕಾಲಿಕ ಉಪನ್ಯಾಸಕರ ಪೈಕಿ 88 ಅಭ್ಯರ್ಥಿಗಳು ಎನ್.ಇ.ಟಿ. : ಎಸ್.ಎಲ್.ಇ.ಟಿ. ಪಾಸು ಮಾಡಿರುತ್ತಾರೆ.

ಸರ್ವೋಚ್ಚ ನ್ಯಾಯಾಲಯದ ತೀರ್ಪಿನಲ್ಲಿ ಸೇವಾ ಸಕ್ರಮಗೊಂಡ ಅರೆಕಾಲಿಕ ಉಪನ್ಯಾಸಕರು 3 ವರ್ಷಗಳೊಳಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ತೇರ್ಗಡೆಯಾಗದಿದ್ದಲ್ಲಿ ಅವರನ್ನು ಸೇವೆಯಿಂದ ವಜಾಗೊಳಿಸಲು ಸ್ಪಷ್ಟ ನಿರ್ದೇಶನವಿದೆ. ಎನ್.ಇ.ಟಿ. / ಎಸ್.ಎಲ್.ಇ.ಟಿ. ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರಿಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪಾಸು ಮಾಡಲು ನೀಡಲಾಗಿದ್ದ ಕಾಲಾವಕಾಶ ದಿನಾಂಕ: 9.7.2005ಕ್ಕೆ ಮುಗಿದಿದೆ.

ಶ್ರೀಮತಿ ಎಂ.ಕೆ. ಸುಜಾತ ಮತ್ತು ಇತರರು ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮಧ್ಯಂತರ ಅರ್ಜಿ ಸಂಖ್ಯೆ: 43-62/2005 ನ್ಯಾಯಾಲಯದ ಮುಂದೆ ದಿನಾಂಕ: 11.07.2005 ರಂದು ವಿಚಾರಣೆಗೆ ಬರುತ್ತಿದ್ದುದರ ಹಿನ್ನೆಲೆಯಲ್ಲಿ ಇವರುಗಳ ಸೇವೆಯನ್ನು ದಿನಾಂಕ: 9.07.2005 ರಂದು ವಜಾಗೊಳಿಸದೆ ದಿನಾಂಕ: 11.07.2005 ರಂದು ನ್ಯಾಯಾಲಯದಲ್ಲಿನ ಬೆಳವಣಿಗೆಗಳನ್ನು ಕಾಯಲಾಗಿತ್ತು. ಸದರಿ ಪ್ರಕರಣವು ದಿನಾಂಕ: 11.07.2005 ರಂದು ಸರ್ವೋಚ್ಚ ನ್ಯಾಯಾಲಯದ ಮುಂದೆ ವಿಚಾರಣೆಗೆ ಬಂದು ಹಿಂತೆದುಕೊಂಡಂತೆ ವಜಾಗೊಳಿಸಲ್ಪಟ್ಟಿದೆ.

ಆದುದರಿಂದ ಕಾಲೇಜು ಶಿಕ್ಷಣ ಇಲಾಖೆ ಸೇವೆಯಲ್ಲಿ ವಿಲೀನಗೊಳಿಸಲ್ಪಟ್ಟ ಆದರೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಸರ್ವೋಚ್ಚ ನ್ಯಾಯಾಲಯವು ಎಸ್.ಎಲ್.ಪಿ. (ಸಿವಿಲ್) ಸಂಖ್ಯೆ: 15991/99ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ಸಂಖ್ಯೆ: 27/2001ರ ಮೇಲೆ ದಿನಾಂಕ: 4.1.2001 ರಂದು ನೀಡಿರುವ ತೀರ್ಪು ಮತ್ತು ಇದರನ್ವಯ ದಿನಾಂಕ: 9.7.2002ರ ಸರ್ಕಾರದ ಅಧಿಸೂಚನೆಯಲ್ಲಿ ಹೊರಡಿಸಲ್ಪಟ್ಟ ತಿದ್ದುಪಡಿ ನಿಯಮಗಳನ್ವಯ ಸೇವೆಯಿಂದ ತೆಗೆದುಹಾಕಲಾಗಿದೆ.

ಕಾಲೇಜು ಶಿಕ್ಷಣ ಆಯುಕ್ತರು, ಬೆಂಗಳೂರು ರವರು ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಕಾಲೇಜುಗಳ ಉಪನ್ಯಾಸಕರ ಹುದ್ದೆಗಳಲ್ಲಿ ಸೇವಾ ವಿಲೀನಗೊಳಿಸಲ್ಪಟ್ಟ ಆದರೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಬಿಡುಗಡೆಗೊಳಿಸಲು ಕ್ರಮ ಜರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 223

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಾಇ 34 ಕಾಬಾನಿ 2005, ಬೆಂಗಳೂರು, ದಿನಾಂಕ: 7ನೇ ಜುಲೈ 2005

ಕಾರ್ಖಾನೆಗಳ ಕಾಯ್ದೆ, 1948ರ ಕಲಂ 66 ಉಪವಿಧಿ (1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮೆ: ಸ್ಟೈಸರ್ ಇಂಡಿಯಾ ಲಿಮಿಟೆಡ್, ಜೋಡಹಳ್ಳಿ ಗ್ರಾಮ, ಧಾರವಾಡ, ಈ ಕಾರ್ಖಾನೆಯ ಆಡಳಿತ ವರ್ಗದವರಿಗೆ ಈ ಕಾರ್ಖಾನೆಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಂದ ಎರಡನೇ ಪಾಳಿಯಲ್ಲಿ ಕೆಲಸ ಮಾಡಿಸಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1) ಆಡಳಿತವರ್ಗದವರು ಅರ್ಜಿ ಜೊತೆಯಲ್ಲಿ ಲಗತ್ತಿಸಿರುವ ಮಹಿಳಾ ಕಾರ್ಮಿಕರನ್ನು ಹೊರತುಪಡಿಸಿ ಮತ್ತಾವುದೇ ಮಹಿಳಾ ಕಾರ್ಮಿಕರನ್ನು 2ನೇ ಪಾಳಿಯಲ್ಲಿ ಕೆಲಸ ನಿರ್ವಹಿಸಲು ನೇಮಿಸಲು ಇಚ್ಚಿಸಿದ ಪಕ್ಷದಲ್ಲಿ ಅಂತಹ ಮಹಿಳಾ ಕಾರ್ಮಿಕರಿಂದ ಪೂರ್ವಭಾವಿಯಾಗಿ ಲಿಖಿತ ಅನುಮತಿ ಪಡೆಯುವುದು;
2) ಮಹಿಳಾ ಕಾರ್ಮಿಕರಿಂದ ಯಾವುದೇ ಸಂದರ್ಭದಲ್ಲಿ ಹೆಚ್ಚುವರಿ ಕೆಲಸ ನಿರ್ವಹಿಸಬಾರದು. ಇದು ವಿನಾಯಿತಿ ನೀಡಲಾದ ಮಹಿಳಾ ಕಾರ್ಮಿಕರಿಗೂ ಸಹ ಅನ್ವಯಿಸುತ್ತದೆ;
3) ಯಾವುದೇ ಸಂದರ್ಭದಲ್ಲಿ ಸಾಯಂಕಾಲ 7.00 ಗಂಟೆಯ ನಂತರ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರು ಕೆಲಸಕ್ಕೆ ಹಾಜರಾಗುವ ಮುನ್ನ ಹಾಗೂ ನಂತರದ ಕನಿಷ್ಠ 9.00 ಗಂಟೆ ಕಾಲ ವಿಶ್ರಾಂತಿ ದೊರೆಯುವಂತೆ ನೋಡಿಕೊಳ್ಳುವುದು;
4) ರಾತ್ರಿ 10.00 ಗಂಟೆಯವರೆಗೆ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರನ್ನು ಅವರವರ ಮನೆಗಳಿಗೆ ತಲುಪಿಸಲು ವಾಹನ ಸೌಕರ್ಯವನ್ನು ಒದಗಿಸುವುದು;
5) ವಿನಾಯಿತಿ ಅವಧಿಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಶಿಶು ಸಂರಕ್ಷಣೆ ಸೌಲಭ್ಯವನ್ನು ಅವರು ಕೆಲಸ ನಿರ್ವಹಿಸುವವರೆಗೆ ಒದಗಿಸುವುದು;
6) ಮಹಿಳಾ ಕಾರ್ಮಿಕರು ಲೈಂಗಿಕ ಕಿರುಕುಳಕ್ಕೆ ಒಳಗಾಗದಂತೆ ಮುಂಜಾಗ್ರತಾ ಮತ್ತು ಸುರಕ್ಷತಾ ಕ್ರಮ ಕುರಿತು ನಿಗಾ ವಹಿಸುವುದು;
7) ಸದರಿ ಅಧಿಸೂಚನೆಯನ್ನು ಕಾರ್ಖಾನೆಯ ಸೂಚನಾ ಫಲಕದಲ್ಲಿ ಪ್ರದರ್ಶಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಪಿ.ಆರ್. 224

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ. (ಕಾರ್ಖಾನೆ ಮತ್ತು ಬಾಯ್ಲರುಗಳು)

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 68 ಎಂಎಲ್ಆರ್ 2004 (A-4), ಬೆಂಗಳೂರು, ದಿನಾಂಕ: 6ನೇ ಜುಲೈ 2005

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಯಲಹಂಕ ನಗರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್ಆರ್ 2002 (A-23) ದಿನಾಂಕ: 23.4.2003 ರಲ್ಲಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರ ಬದಲಿಗೆ

1. ಶ್ರೀ ವೈ.ಜಿ. ಶ್ರೀನಿವಾಸ್ ಮೂರ್ತಿ ಬಿನ್ ಗೋಪಾಲಪ್ಪ, ನಂ.476, 3ನೇ ಮುಖ್ಯ ರಸ್ತೆ, 3ನೇ ಕ್ರಾಸ್, ಅಟ್ಟೂರು ಬಡಾವಣೆ, ಯಲಹಂಕ, ಬೆಂಗಳೂರು-64.
2. ಶ್ರೀಮತಿ ಕವಿತ ರೆಡ್ಡಿ ಕೋಂ ವೆಂಕಟೇಶ್ ರೆಡ್ಡಿ, ನಂ.2291, ಎಂ.ಐ.ಜಿ. 3ನೇ ಹಂತ, 5ನೇ ಬಿ ಮುಖ್ಯ ರಸ್ತೆ, ಯಲಹಂಕ ಉಪನಗರ, ಬೆಂಗಳೂರು-64.
3. ಶ್ರೀ ಮಣಿ ಎನ್. ಬಿನ್ ನಟೇಶನ್ (ಲೇಟ್), ನಂ.134, ಎಲ್.ಬಿ.ಎಸ್. ನಗರ, ಬೆಂಗಳೂರು-64.
4. ಶ್ರೀ ಗೋಪಿನಾಥ್ ಎ.ಎನ್. ಬಿನ್ ಟಿ. ನಾರಾಯಣಪ್ಪ, ಅಳ್ಳಾಳಸಂದ್ರ, ಜಿ.ಕೆ.ವಿ.ಕೆ. ಅಂಚೆ, ಬೆಂಗಳೂರು-64.
5. ಶ್ರೀ ರಾಜಕುಮಾರ ಬಿನ್ ಗೋವಿಂದಪ್ಪ, ಹೊಸ ಬೀದಿ, ಯಲಹಂಕ, ಬೆಂಗಳೂರು-64.

ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 220

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 68 ಎಂಎಲ್ಆರ್ 2004 (A-6), ಬೆಂಗಳೂರು, ದಿನಾಂಕ: 6ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿವಮೊಗ್ಗ ನಗರಸಭೆಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಯು. ಶಿವಾನಂದ ಬಿನ್ ಯು. ಆನಂದಶೆಟ್ಟಿ, ಅಣ್ಣಾನಗರ, ಶಿವಮೊಗ್ಗ.
2. ಶ್ರೀ ಕೆ. ದೇವೇಂದ್ರಪ್ಪ ಬಿನ್ ಕರಿಯಪ್ಪ, ಜೈಲ್ ರಸ್ತೆ, ಶಿವಮೊಗ್ಗ.
3. ಶ್ರೀ ಎಸ್. ಚನ್ನಪ್ಪ ಬಿನ್ ಚನ್ನಪ್ಪ, ನಗರಸಭಾ ಮಾಜಿ ಸದಸ್ಯರು, ಗೋಪಾಳ, ಶಿವಮೊಗ್ಗ.
4. ಶ್ರೀ ಹೆಚ್.ಎನ್. ರವೀಶ್, ಡಿ.ಸಿ.ಇ. ಬಿನ್ ನಿಂಗೇಗೌಡ, ಸ್ಕಂದ ನಿಲಯ, ಇಂದಿರಾನಗರ, ಊರಗಡೂರು, ಶಿವಮೊಗ್ಗ.
5. ಶ್ರೀ ಕೆ. ಸಿದ್ದಪ್ಪ ಬಿನ್ ಶ್ರೀ ಕೆಂಚಪ್ಪ, ಅಂತರಘಟಮ್ಮ ದೇವಸ್ಥಾನದ ಹತ್ತಿರ, ಸೀಗೆಹಟ್ಟಿ, ಶಿವಮೊಗ್ಗ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 221

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 68 ಎಂಎಲ್ಆರ್ 2004 (B-7), ಬೆಂಗಳೂರು, ದಿನಾಂಕ: 7ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸವದತ್ತಿ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್ಆರ್ 2002 (B-40) ದಿನಾಂಕ: 29.06.2002 ರಲ್ಲಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರ ಬದಲಿಗೆ

1. ಶ್ರೀ ನೀಲಪ್ಪ ಅಣ್ಣೀಗೇರಿ, ಸವದತ್ತಿ, ಸವದತ್ತಿ ತಾಲ್ಲೂಕು.
2. ಶ್ರೀ ಅರ್ಜುಣ ಅಣ್ಣೆಗೇರಿ, ಸವದತ್ತಿ, ಸವದತ್ತಿ ತಾಲ್ಲೂಕು.
3. ಶ್ರೀ ದಾದಾಬಾಯಿ ಸಣ್ಣಕ್ಕಿ, ಸವದತ್ತಿ, ಸವದತ್ತಿ ತಾಲ್ಲೂಕು.
4. ಶ್ರೀ ಎಸ್.ಬಿ. ಜೋಶಿ, ಸವದತ್ತಿ, ಸವದತ್ತಿ ತಾಲ್ಲೂಕು.
5. ಶ್ರೀಮತಿ ಮಹಾದೇವಿ ಕುಂಬಾರ, ಸವದತ್ತಿ, ಸವದತ್ತಿ ತಾಲ್ಲೂಕು.

ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 222

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**HOME SECRETARIAT**

**NOTIFICATION**

**No. HD 374 PPE 2005, Bangalore, Dated: 8th July 2005**

In exercise of the powers conferred by Sub-section (8) of Section 24 of the code of Criminal Procedure, 1973, (Central Act No.2 of 1974) as amended by the code of Criminal Procedure (Amendment Act 1978) and Rule 30 of the Karnataka Law Officers (Appointment and Conditions of Services) Rules 1977, Sri M.B. Poovanna, Advocate is appointed as Special Public Prosecutor and conduct the case on behalf of the State in S.C.No.53/2001 on the file of the District and Sessions Court, Madikeri.

The remuneration of the Special Public Prosecutor shall be borneby the Complainant Smt. M.M. Shyamala, Madikeri.

By Order and in the name of the Governor of Karnataka,

PR-226

**H.K. GUNDURAO**

Under Secretary to Government, (I/c)

Home Department. (Law and Order and Prosecution)

**LABOUR SECRETARIAT**

**NOTIFICATION**

**No. LD 42 KaBaNi 2004, Bangalore, Dated: 27th June 2005**

Whereas the draft of the following rules further to amend the Karnataka Factories Rules, 1969 was published as required by Section 115 of the Factories Act 1948 (Central Act 63 of 1948) in Notification No. LD 42 KaBaNi 2004, dated: 20.12.2004 in Part-IVA of the Karnataka Gazette dated: 6.1.2005 inviting objections and suggestions from all persons likely to be affected thereby within 45 days from the date of its publication in the Official Gazette.

Whereas the said Gazette was made available to the public on 6.1.2005 and whereas, no objections and suggestions have been received by the State Government.

Now, therefore, in exercise of the powers conferred by Section 112 of the Factories Act, 1948 (Central Act, 63 of 1948) the Government of Karnataka hereby makes the following rules namely:-

**1. Title and commencement:**

1) These rules may be called the Karnataka Factories (Amendment) Rules, 2004.

2) They shall come into force from the date of their publication in the Official Gazette.

**2. Amendment of rule 137:** In rule 137 of the Karnataka Factories Rules, 1969 (hereinafter referred to as the said rules):-

ii) in sub-rule (1), for the words "Muster Roll-com-Register of Wages/Salary", the words "Muster Roll-cum-Register of Wages/Salary/Subsistence Allowance", shall be substituted and in the proviso for the words "muster-roll" the words "Muster-Roll-cum-Register of Wages/Salary/Subsistence Allowance" shall be substituted.

iii) In sub-rule (2) of the words "Muster-Roll-cum-Register of Wages/Salary" occurring in two places the words "Muster Roll-cum-Register of Wages/Salary/Subsistence allowance" shall be substituted.

**2. Amendment of Form 20:** In form 20 of the said rules, after Sl.No.16 and entries relating thereto, the following shall be inserted, namely:-

"17. Particulars of employees placed under suspension:-

| No. of employees suspended during the year | Amount of subsistence allowance paid |
|---|---|
| 1 | 2 |
| | |

**3. Substitution of Form 22:-** For the Form 22 of the said rules, the following shall be substituted, namely:-

**"FORM-22**

**MUSTER ROLL CUM REGISTER OF WAGES/SALARY/SUBSISTENCE ALLOWANCE**

**(See rule-137)**

I. Form 22 (Muster Roll-cum-Register Wages/Salary/Subsistence Allowance) Rule 137 of the Karnataka Factories Rules, (1969)

II. Form V (Rule, 29(1) of the Karnataka Minimum Wages Rules, 1958).

III. Form VII (Rule 29(5) of the Karnataka Minimum Wages Rules, 1958)

IV. Form III (Rule 5 of the Karnataka Payment of Wages Rules, 1963)

V. Form XVI (Rule 78(1) (a)(i) of the Contract Labour (Regulation and Abolition) (Karnataka) Rules, 1974.

VI. Form XVII (Rule 78(1)(a)(i) of the Contract Labour (Regulation and Abolition) (Karnataka) Rules, 1974.

By Order and in the name of the Governor of Karnataka,

**VIMALAKUMARI**

Under Secretary to Government,

Labour Department (Factories & Boilers)

PR-227

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 90 ಆಹಿಸೇ 2004 (ಭಾಗ), ಬೆಂಗಳೂರು, ದಿನಾಂಕ: 11ನೇ ಜುಲೈ 2005**

ಕರ್ನಾಟಕ ಸಿವಿಲ್ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 2ನೇ ನಿಯಮದ (1)ನೇ ಉಪ ನಿಯಮದ (ಎನ್) ಖಂಡದ (ii)ನೇ ಉಪ ಖಂಡದ ಅನುಸಾರವಾಗಿ ಮತ್ತು ಅಧಿಸೂಚನೆ ಸಂಖ್ಯೆ: ಸಿಆಸುಇ 107 ಆಹಿಸೇ 96, ದಿನಾಂಕ: 31.12.1996 ಅನ್ನು ರದ್ದುಗೊಳಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿನ ಪ್ರಾರೂಪಣಾ ಸಹಾಯಕರ ಹುದ್ದೆಗಳಿಗೆ ಬಡ್ತಿ ನೀಡಲು ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಉದ್ದೇಶಕ್ಕಾಗಿ ಈ ಮುಂದೆ ತಿಳಿಸಿರುವ ಅಧಿಕಾರಿಗಳನ್ನೊಳಗೊಂಡ ಒಂದು ಆಯ್ಕೆ ಸಮಿತಿಯನ್ನು ಈ ಮೂಲಕ ರಚಿಸಿದೆ:

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ,<br>ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ | ಅಧ್ಯಕ್ಷರು |
| 2 | ಅಧ್ಯಕ್ಷರಿಂದ ನಾಮ ನಿರ್ದೇಶಿತರಾದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಪರ ಕಾರ್ಯದರ್ಶಿ : ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ. | ಸದಸ್ಯರು |
| 3 | ಸರ್ಕಾರದ ಉಪ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ) | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹುಲಿಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ-1).

ಪಿ.ಆರ್. 228

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAL 88 RTL 2005, Bangalore, Dated: 6th July 2005

In exercise of the powers conferred under section 5(1) of Right to Information Act 2005 (Central Act 22 of 2005) the Under Secretary, Department of Personnel and Administrative Reforms (Janaspandana-Right to Information) is appointed as Pulbic Information Officer, So far as the Office of Principal Secretary, Jananspandana is concerned.

Under Sub-section (2) of Section 5 of the Right to Information Act 2005, Section Officer, Department of Personnel and Administrative Reforms (Janaspandana-Right to Information) is appointed as Assistant Public Information Officer.

Under Section 19(1) of the Right to Information Act 2005 the Joint Secretary, Department of Personnel and Administrative Reforms, Janaspandana is appointed as Appellate Authority, to exercise the Power as provided under the Act.

By Order and in the name of the Governor of Karnataka,

**K.R. BADIGER**

Under Secretary to Government,

Department of Personnel and Administrative Reforms (Janaspandana)

PR-229

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 88 ಮಾಹಲಿ 2005, ಬೆಂಗಳೂರು, ದಿನಾಂಕ: 6ನೇ ಜುಲೈ 2005

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂಖ್ಯೆ: 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನ, ಇವರ ಕಛೇರಿಗೆ ಸಂಬಂಧಿಸಿದಂತೆ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನ ಕೋಶ-ಮಾಹಿತಿ ಹಕ್ಕು) ಇವರನ್ನು **"ಸಾರ್ವಜನಿಕ ಮಾಹಿತಿ ಅಧಿಕಾರಿ"** ಎಂದು ನೇಮಕ ಮಾಡಲಾಗಿದೆ.

ಮೇಲ್ಕಂಡ 2005ರ ಮಾಹಿತಿ ಹಕ್ಕು ಅಧಿನಿಯಮ ಸೆಕ್ಷನ್ 5(2)ರ ಅಡಿಯಲ್ಲಿ ಶಾಖಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನ ಕೋಶ-ಮಾಹಿತಿ ಹಕ್ಕು) ಇವರನ್ನು **"ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ"** ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯ್ದೆ ಸೆಕ್ಷನ್ 19(1)ರ ಅಡಿಯಲ್ಲಿ ಸಹ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಜನಸ್ಪಂದನ, ಇವರನ್ನು ಕಾಯ್ದೆ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು **"ಮೇಲ್ಮನವಿ ಪ್ರಾಧಿಕಾರ"** ಎಂದು ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ಬಡಿಗೇರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಜನಸ್ಪಂದನ ಕೋಶ).

ಪಿ.ಆರ್. 230

### ಅಧಿಸೂಚನೆ

### ಸಂಖ್ಯೆ: ಸಿಆಸುಇ 65 ಇಆಇ 2005, ಬೆಂಗಳೂರು, ದಿನಾಂಕ: 15ನೇ ಜುಲೈ 2005

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ ನಿಯಮ 2 ರನ್ವಯ ಹಾಗೂ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ 5(1) ರನ್ವಯ ಇ-ಆಡಳಿತ ಸಚಿವಾಲಯ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು.) ಇದಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| | |
|---|---|
| ಇ-ಆಡಳಿತ ಸಚಿವಾಲಯ<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು.) 2ನೇ ಹಂತ ಬಹುಮಹಡಿ ಕಟ್ಟಡ, ಬೆಂಗಳೂರು. | ಸಾರ್ವಜನಿಕ ಪ್ರಾಧಿಕಾರ |
| ಸರ್ಕಾರದ ಉಪ ಕಾರ್ಯದರ್ಶಿ<br>(ಇ-ಆಡಳಿತ) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು.) | ಸಕ್ಷಮ ಪ್ರಾಧಿಕಾರ |
| ಸರ್ಕಾರದ ಕಾರ್ಯದರ್ಶಿ<br>(ಇ-ಆಡಳಿತ) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು.) | ಅಪೀಲು ಪ್ರಾಧಿಕಾರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಸತ್ಯವತಿ**

ಉಪ ಕಾರ್ಯದರ್ಶಿ, ಇ-ಆಡಳಿತ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು.)

ಪಿ.ಆರ್. 231

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 416 ಮುನೋಮು 2005, ಬೆಂಗಳೂರು, ದಿನಾಂಕ: 13ನೇ ಜುಲೈ 2005

ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕೇಂದ್ರ ಕಛೇರಿ, ಹುಬ್ಬಳ್ಳಿ ಸಂಚಾರ ಇಲಾಖೆ ರವರು ಬೆಳಗಾವಿಯಲ್ಲಿ ವಿಭಾಗೀಯ ಕಾರ್ಯಾಗಾರ ನಿರ್ಮಿಸಲು ಕೆ.ಐ.ಎ.ಡಿ.ಬಿ. ರವರಿಂದ ಕಲಬುರ್ಗಿಯಲ್ಲಿ ಪಡೆದುಕೊಂಡಿರುವ 5 ಎಕರೆ ನಿವೇಶನಕ್ಕೆ 33.75 ಲಕ್ಷ ರೂಪಾಯಿಗಳನ್ನು ಪಾವತಿಸಿದ್ದು

ಅದರ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ.50 ರಷ್ಟು ಅಂದರೆ ರೂ.1.35 ಲಕ್ಷಗಳನ್ನು ಕರ್ನಾಟಕ ಮುದ್ರಾಂಕ ಕಾಯಿದೆ 1957ರ ಕಲಂ 9ರ ಪ್ರಕಾರ ಹಾಗೂ ನೋಂದಣಿ ಶುಲ್ಕ ಶೇ.50 ರಷ್ಟು ಅಂದರೆ ರೂ.16,875/- ಗಳನ್ನು ಕರ್ನಾಟಕ ನೋಂದಣಿ ಕಾಯ್ದೆ 1908ರ (ಕೇಂದ್ರೀಯ ಕಾಯ್ದೆ 1908ರ XVI) ರ ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಿಯಾಯಿತಿ ನೀಡಲಾಗಿದೆ.

ಈ ಅಧಿಸೂಚನೆಯನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 274 ವೆಚ್ಚ-7/2005, ದಿನಾಂಕ: 23.06.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 233

## HEALTH AND FAMILY WELFARE SECRETARIAT

### NOTIFICATION

**No. HFW 76 IMM 2005, Bangalore, Dated: 12th July 2005**

In super session of Notification No. HFW 44 IMM 2005 dated: 26.02.2005 and in exercise of the powers conferred under Section 21(4) of Drugs and Cosmetics Act read with Rule 50(2) of Drugs and Cosmetics Rules, Government of Karnataka hereby appoints Sri M.N. Ramamurthy, Additional Drugs Controller, Drugs Control Department, who is placed in Additional charge of the post of Drugs Controller as Controlling Authority for the purpose of Chapter IV of the Drugs and Cosmetics Act, 1940 and Rules made there under.

By Order and in the name of the Governor of Karnataka,
**CHOMANAYAK G.**
Deputy Secretary to Government-2
Health and Family Welfare Department.

### NOTIFICATION

**No. HFW 76 IMM 2005 (I), Bangalore, Dated: 12th July 2005**

In exercise of the powers conferred under part-VII, VIII, XA, XB and part-XIV of the Drugs and Cosmetics Rules, 1945 the Government of Karnataka here by amends Notification No.HFW 127 IMM 2004 (II), dated: 7.10.2004 as follows namely:-

In said notification and in Annexure in the table vide serial No.3 who was promoted as Additional Drugs Controller in Government Notification No. HFW 76 IMM 2005 Dated: 30.6.2005 is continued as the **Licensing Authority** for the areas notified in column No.3 of the said Annexure.

By Order and in the name of the Governor of Karnataka,
**CHOMANAYAK G.**
Deputy Secretary to Government-2
Health and Family Welfare Department.

### NOTIFICATION

**No. HFW 76 IMM 2005 (II), Bangalore, Dated: 12th July 2005**

In exercise of the powers conferred under Rule-150B part-XV (A) of Drugs and Cosmetics Rules, 1945 the Government of Karnataka here by amends Notification No. HFW 127 IMM 2004 (III), dated: 7.10.2004 as follows namely:-

In said notification and in Annexure in the table vide serial No.3 who was promoted as Additional Drugs Controller in Government Notification No. HFW 76 IMM 2005 Dated: 30.6.2005 is continued as the **Approving Authority** for the areas notified in column No.3 of the said Annexure.

By Order and in the name of the Governor of Karnataka,
**CHOMANAYAK G.**
Deputy Secretary to Government-2
Health and Family Welfare Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ಆಡಳಿತ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಕುಕ 79 ಪಿಟಿಡಿ 2004, ದಿನಾಂಕ: 10.5.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್ ರಚಿಸಿ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರನ್ನು ಆಡಳಿತ ಮಂಡಳಿಯ ಅಧ್ಯಕ್ಷರನ್ನಾಗಿ ಹಾಗೂ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರನ್ನು ಉಪಾಧ್ಯಕ್ಷರನ್ನಾಗಿ ನೇಮಕ ಮಾಡಲಾಗಿತ್ತು.

ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯು ವೈದ್ಯಕೀಯ ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಗೆ ಬರುವುದರಿಂದ ವೈದ್ಯಕೀಯ ಶಿಕ್ಷಣ ಸಚಿವರನ್ನು ಸದರಿ ಸಂಸ್ಥೆಯ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರನ್ನು ಉಪಾಧ್ಯಕ್ಷರಾಗಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 79 ಪಿಟಿಡಿ 2004, ದಿನಾಂಕ: 7ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1) | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು | ಅಧ್ಯಕ್ಷರು |
| 2) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಉಪಾಧ್ಯಕ್ಷರು |
| 3) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 4) | ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 5) | ಸರ್ಕಾರದ ಕಾರ್ಯದರ್ಶಿಗಳು, ಯೋಜನಾ ಇಲಾಖೆ | ಸದಸ್ಯರು |
| 6) | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 7) | ನಿರ್ದೇಶಕರು, ವೈದ್ಯಕೀಯ ಶಿಕ್ಷಣ | ಸದಸ್ಯರು |
| 8) | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| **ಅಧಿಕಾರೇತರ ಸದಸ್ಯರು:** | | |
| 1) | ವಿಧಾನಸಭಾ ಸದಸ್ಯರು, ಜಯನಗರ, ವಿಧಾನಸಭಾ ಕ್ಷೇತ್ರ, ಬೆಂಗಳೂರು | ಸದಸ್ಯರು |
| 2) | ಶ್ರೀ ಡಿ.ಎಲ್. ಜಗದೀಶ್,<br>ಮಾಜಿ ವಿಧಾನ ಪರಿಷತ್ ಸದಸ್ಯರು, ಅಧ್ಯಕ್ಷರು, ಬಾರ್ ಕೌನ್ಸಿಲ್, ಕರ್ನಾಟಕ | ಸದಸ್ಯರು |
| 3) | ಶ್ರೀ ಬಿ.ಎಲ್.ಎಸ್. ಮೂರ್ತಿಯವರು, ಬೆಂಗಳೂರು | ಸದಸ್ಯರು |
| 4) | ಶ್ರೀಮತಿ ಸವಿತಾ ಮೆಲ್ವಾನಿ, ಕಿಡ್ಸ್‌ಕೆಂಪ್, ಬೆಂಗಳೂರು. | ಸದಸ್ಯರು |
| 5) | ಶ್ರೀ ವಿಜಯ್ ಸಿ. ಕುಮಾರ್, ಶ್ರೀಮಾನ್ ಹರಿನಾಮದಾಸ್ ಟ್ರಸ್ಟ್, ಬೆಂಗಳೂರು | ಸದಸ್ಯರು |
| 6) | ಡಾ: ಡಿ.ಜಿ. ಬೆನಕಪ್ಪ, ಮಕ್ಕಳ ತಜ್ಞರು, ಜಯನಗರ, ಬೆಂಗಳೂರು. | ಸದಸ್ಯರು |
| 7) | ಶ್ರೀ ವಿ.ಎಸ್. ಕೃಷ್ಣಯ್ಯರ್, ಮಾಜಿ ವಿಧಾನಸಭಾ ಸದಸ್ಯರು, ಬೆಂಗಳೂರು. | ಸದಸ್ಯರು |
| 8) | ನಿರ್ದೇಶಕರು, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿಗಳು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭಾಕರ್ ಎಂ. ಶೇಟ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ).

ಪಿ.ಆರ್. 234

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ನಅಇ 68 ಎಂಎಲ್ಆರ್ 2004 (ಬಿ-10), ಬೆಂಗಳೂರು, ದಿನಾಂಕ: 13ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಥಣಿ ಪುರಸಭೆಗೆ ಸರ್ಕಾರವು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿ ಹೊರಡಿಸಿರುವ ದಿನಾಂಕ: 2.5.2002, 5.11.2002 ಮತ್ತು 6.2.2003ರ ಆದೇಶಗಳನ್ನು ರದ್ದುಪಡಿಸಿ ಅದರ ಬದಲಿಗೆ

1. ಶ್ರೀಮತಿ ವಿಜಯಕುಮಾರ ಜುರ್ಲಿ, ಅಥಣಿ.
2. ಶ್ರೀಮತಿ ಸವಿತಾ ಶಂಕರಕೋಳಿ, ಅಥಣಿ.
3. ಶ್ರೀ ದಿಲೀಪ ತಮ್ಮಾ ಕಾಂಬಳೆ, ಅಥಣಿ.
4. ಶ್ರೀ ಅಬ್ದುಲ್ ಅಜೀಜ್ ಮುಜಾಹಿತ, ಅಥಣಿ.
5. ಶ್ರೀ ಮಲ್ಲಿಕಾರ್ಜುನ ಕನಶೆಟ್ಟಿ, ಅಥಣಿ.

ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥಣಿ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 235

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 68 ಎಂಎಲ್‌ಆರ್ 2004 (ಬಿ-21), ಬೆಂಗಳೂರು, ದಿನಾಂಕ: 11ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಳಂದ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್‌ಆರ್ 2002 (ಬಿ-76) ದಿನಾಂಕ: 27.02.2004 ರಲ್ಲಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರ ಬದಲಿಗೆ

1. ಶ್ರೀಮತಿ ಕಬೀರಾಬಿ ಖುರೇಶಿ, ಖುರೇಶಿ ಮೊಹಲ್ಲಾ, ಆಳಂದ.
2. ಶ್ರೀ ಗುರುನಾಥ ಶಿವಶಂಕರಪ್ಪ ಸನ್ಮುಖಿ, ಶರಣ ನಗರ, ಆಳಂದ.
3. ಶ್ರೀ ಪಂಡಿತ ಶೇರಿಕಾರ ತಂದೆ ಮಲ್ಕಣ್ಣ ಶೇರಿಕಾರ, ಸುಲ್ತಾನಪುರ ಗಲ್ಲಿ, ಆಳಂದ.
4. ಶ್ರೀ ಸಂಪತ್ ಕುಮಾರ್ ಕೃಪೇಂದ್ರ, ಬಾಳೆನಗಲ್ಲಿ, ಆಳಂದ.
5. ಶ್ರೀ ದೇವೀಂದ್ರಪ್ಪ ಮುರುಕುಂದಪ್ಪ ದಂಡಗೋಳಕರ, ಆಯ್ಯಾ ಜಂಗಲ್, ವಡ್ಡರಗಲ್ಲಿ, ಆಳಂದ.

ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಳಂದ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 236

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 68 ಎಂಎಲ್‌ಆರ್ 2004 (ಸಿ-12), ಬೆಂಗಳೂರು, ದಿನಾಂಕ: 13ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಿರೇಕೆರೂರು ಪಟ್ಟಣ ಪಂಚಾಯಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಗುರುಶಾಂತ ಬಸವರಾಜಪ್ಪ ಯತ್ತಿನಹಳ್ಳಿ, ಹಿರೇಕೆರೂರು.
2. ಶ್ರೀ ಮೃತ್ಯುಂಜಯ ಶಿವನಗೌಡ ಗವಿಯಪ್ಪನವರ್, ಹಿರೇಕೆರೂರು.
3. ಶ್ರೀ ಬಸವರಾಜ ಗಂಗಪ್ಪ ಕಾಲ್ವೆಹಳ್ಳಿ, ಹಿರೇಕೆರೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 237

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 68 ಎಂಎಲ್‌ಆರ್ 2004 (ಸಿ-25), ಬೆಂಗಳೂರು, ದಿನಾಂಕ: 11ನೇ ಜುಲೈ 2005**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪಿರಿಯಾಪಟ್ಟಣ ಪಟ್ಟಣ ಪಂಚಾಯಿತಿಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್‌ಆರ್ 2002 (ಸಿ-62) ದಿನಾಂಕ: 18.10.2002 ರಲ್ಲಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಅವರ ಬದಲಿಗೆ

1. ಶ್ರೀ ಅಬ್ದುಲ್ ಅಜೀಜ್, ಮುಸ್ಲಿಂ ಬ್ಲಾಕ್, ಪಿರಿಯಾಪಟ್ಟಣ ಟೌನ್.
2. ಶ್ರೀ ಶ್ರೀನಿವಾಸ್, ಮುತ್ತಯ್ಯ ಬಡಾವಣೆ, ಪಿರಿಯಾಪಟ್ಟಣ ಟೌನ್.
3. ಶ್ರೀ ಪಿ. ಮಹದೇವ್, ಕೃಷ್ಣಾಪುರ, ಪಿರಿಯಾಪಟ್ಟಣ ಟೌನ್.

ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಪಿರಿಯಾಪಟ್ಟಣ ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 238

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**COMMERCE & INDUSTRIES SECRETARIAT**

**NOTIFICATION**

**No. CI.153 MMM 2004, Bangalore, Dated: 12th July 2005**

In pursuance of sub-section (3) of Section 8 of the Mines and Minerals (Development and Regulation) Act, 1957, and after obtaining approval of Government of India, Ministry of Coal and Mines, Department of Mines, New Delhi vide their letter No.5/34/2005-M.IV dated 14.06.2005 the Government of Karnataka hereby accords sanction for grant of Mining Lease for a period of 20 years(Twenty years only) in favour of Shri G.J.Kumar for Iron Ore over an area of 3-30 acres (1.52 hctares) in Survey No.4 of Bedarabommanahalli village of Chitradurga taluk and Chitradurga district as per the sketch furnished by the Director of Mines and Geology, Bangalore subject to compliance of the provisions of the Mines and

